# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 794

ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 25-09-2020

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ವಿದ್ಯಾರ್ಥಿಗಳಿಗೆ ರಿಯಾಯತಿ ಬಸ್ ಪಾಸ್ ಸೌಲಭ್ಯವನ್ನು ನೀಡಲಾಗುತ್ತಿದೆಯೇ; | ವಿದ್ಯಾರ್ಥಿಗಳಿಗೆ ರಿಯಾಯತಿ ಬಸ್ ಪಾಸ್ ಸೌಲಭ್ಯವನ್ನು ನೀಡಲಾಗುತ್ತಿದೆ. |
| ಆ. | ರಿಯಾಯತಿ ಪಾಸ್ ನೀಡುವಲ್ಲಿ ಅನುಸರಿಸುತ್ತಿರುವ ಮಾನದಂಡಗಳೇನು; | ವಿದ್ಯಾರ್ಥಿ ಬಸ್ ಪಾಸ್ ವಿತರಣೆಯಲ್ಲಿ ಈ ಕೆಳಕಂಡ ಮಾನದಂಡಗಳನ್ನು ಅನುಸರಿಸಲಾಗುತ್ತಿದೆ:<br>1. ವಿದ್ಯಾರ್ಥಿಯು ಕರ್ನಾಟಕ ಸರ್ಕಾರ / ಭಾರತ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳು/ ವಿಶ್ವವಿದ್ಯಾನಿಲಯಗಳ ಪೂರ್ಣಾವಧಿ ಕೋರ್ಸುಗಳಲ್ಲಿ ಅಭ್ಯಾಸಿಸುತ್ತಿರಬೇಕು.<br>2. ವಿದ್ಯಾರ್ಥಿಗಳು ವಾಸಸ್ಥಳದಿಂದ ವಿದ್ಯಾಸಂಸ್ಥೆವರೆಗೆ ಪ್ರಯಾಣಿಸಲು ಗರಿಷ್ಠ ಪ್ರಯಾಣ ಮಿತಿ 60 ಕಿ.ಮೀವರೆಗೆ ಬಸ್ ಪಾಸ್ ವಿತರಿಸಲಾಗುತ್ತಿದೆ.<br>3. ಪ್ರಸಕ್ತ ಸಾಲಿನಲ್ಲಿ ವಿದ್ಯಾಸಂಸ್ಥೆಗೆ ಶುಲ್ಕ ಪಾವತಿಸಿರುವ ರಸೀದಿಯನ್ನು ಹಾಗೂ ಶಾಲಾ/ಕಾಲೇಜಿನ ಗುರುತಿನ ಚೀಟಿಯನ್ನು ಪಾಸು ಪಡೆಯುವ ವೇಳೆ ಹಾಜರುಪಡಿಸಬೇಕಿರುತ್ತದೆ.<br>4. 7ನೇ ತರಗತಿವರೆಗೆ ವ್ಯಾಸಂಗ ಮಾಡುತ್ತಿರುವ ಎಲ್ಲಾ ವರ್ಗದ ವಿದ್ಯಾರ್ಥಿಗಳಿಗೆ ಉಚಿತ ಪಾಸು ವಿತರಿಸಲಾಗುತ್ತಿದೆ.<br>5. ಉಚಿತ ವಿದ್ಯಾರ್ಥಿ ಬಸ್ ಪಾಸ್‌ದಾರರು ನಿಗದಿತ ಸಂಸ್ಕರಣಾ ಶುಲ್ಕ ಮತ್ತು ಅಪಘಾತ ಪರಿಹಾರ ನಿಧಿ ಶುಲ್ಕವನ್ನು ಮಾತ್ರ (ಪ್ರಸ್ತುತ ರೂ.150/--) ಪಾವತಿಸಬೇಕಿರುತ್ತದೆ.<br>6. ರಿಯಾಯಿತಿ ಬಸ್ ಪಾಸ್‌ದಾರರು ನಿಗದಿತ ಪಾಸಿನ ಶುಲ್ಕ, ಸಂಸ್ಕರಣಾ ಶುಲ್ಕ ಹಾಗೂ ಅಪಘಾತ ಪರಿಹಾರ ನಿಧಿ ಶುಲ್ಕವನ್ನು ಪಾವತಿಸಬೇಕಿರುತ್ತದೆ.<br>7. 2017-18ನೇ ಸಾಲಿನಿಂದ ಸರ್ಕಾರದ ಆದೇಶದನ್ವಯ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ವಿದ್ಯಾರ್ಥಿಗಳಿಗೆ ಉಚಿತ ಬಸ್ ಪಾಸ್ ವಿತರಣೆ ಮಾಡುತ್ತಿರುವುದರಿಂದ ಸದರಿ ವರ್ಗದ ವಿದ್ಯಾರ್ಥಿಗಳು ಕಡ್ಡಾಯವಾಗಿ ಜಾತಿ ಪ್ರಮಾಣ ಪತ್ರದ ಪ್ರತಿಯನ್ನು ನೀಡಬೇಕಿರುತ್ತದೆ. ದಾಖಲಾತಿ ಪರಿಶೀಲನೆ ವೇಳೆ ಮೂಲ ಜಾತಿ ಪ್ರಮಾಣ ಪತ್ರವನ್ನು ಹಾಜರುಪಡಿಸಬೇಕು. |

| | | |
|---|---|---|
| | | 8. **ಬೆಂ.ಮ.ಸಾ.ಸಂಸ್ಥೆಯಲ್ಲಿ** ವಿದ್ಯಾರ್ಥಿಗಳು ಪಾಸಿಗಾಗಿ ಸಂಸ್ಥೆಯ ವೆಬ್‌ಸೈಟ್ www.mybmtc.com ಹಾಗೂ ಸೇವಾ ಸಿಂಧು ಪೋರ್ಟಲ್‌ನಲ್ಲಿ ಆನ್‌ಲೈನ್ ಮೂಲಕ ಅರ್ಜಿಯನ್ನು ಭರ್ತಿ ಮಾಡಿ ಪ್ರಸ್ತುತ ಸಾಲಿನ ಶಾಲಾ/ಕಾಲೇಜಿನ ಶುಲ್ಕ ರಸೀದಿ ಮತ್ತು ಭಾವಚಿತ್ರವನ್ನು ಅಪ್‌ಲೋಡ್ ಮಾಡಿ ಸಲ್ಲಿಸುವುದು.<br><br>9. ವಿದ್ಯಾರ್ಥಿಗಳು ಸಲ್ಲಿಸಿದ ಅರ್ಜಿಗಳನ್ನು (ರಾಜ್ಯ ಪಠ್ಯಕ್ರಮ ಅಭ್ಯಸಿಸುವ ವಿದ್ಯಾರ್ಥಿಗಳನ್ನು ಹೊರತುಪಡಿಸಿ) ಶಾಲಾ/ಕಾಲೇಜು ನೋಡಲ್ ಅಧಿಕಾರಿಗಳು ಪರಿಶೀಲಿಸಿ ಆನ್‌ಲೈನ್ ಮೂಲಕವೇ ಅನುಮೋದನೆಯನ್ನು ನೀಡುವುದು.<br><br>10. ರಾಜ್ಯ ಪಠ್ಯಕ್ರಮ ಅಭ್ಯಸಿಸುವ ವಿದ್ಯಾರ್ಥಿಗಳಿಗಾಗಿ ನಿಗಧಿತ ಅರ್ಜಿಯನ್ನು ನೀಡಿದ್ದು, ಸದರಿ ಅರ್ಜಿಗಳನ್ನು ವಿದ್ಯಾರ್ಥಿಗಳು ಭರ್ತಿ ಮಾಡಿ, ಶಾಲೆಯ ಮುಖ್ಯಸ್ಥರಿಂದ ದೃಢೀಕರಿಸಿ, ನಂತರ ಸ್ಕ್ಯಾನ್ ಮಾಡಿ ಆನ್‌ಲೈನ್ ಅರ್ಜಿಯಲ್ಲಿ ಅಪ್‌ಲೋಡ್ ಮಾಡುವುದು. ಸದರಿ ವಿದ್ಯಾರ್ಥಿಗಳ ಅರ್ಜಿಯನ್ನು ಬೆಂ.ಮ.ಸಾ.ಸಂಸ್ಥೆಯಿಂದ ಪರಿಶೀಲಿಸಿ ಅನುಮೋದಿಸಲಾಗುತ್ತಿದೆ.<br><br>11. ಈ ರೀತಿ ಅನುಮೋದನೆ ದೊರೆತ ನಂತರ ವಿದ್ಯಾರ್ಥಿಗಳು ಪಾಸ್ ಪಡೆಯುವ ಪಾಸು ವಿತರಣಾ ಕೌಂಟರ್, ದಿನಾಂಕ, ಸಮಯವನ್ನು ನಿಗಧಿಪಡಿಸಿಕೊಂಡು, ಅದರಂತೆ ಪಾಸ್ ಕೌಂಟರ್‌ಗೆ ಬಂದು ಪಾಸಿನ ಮೊತ್ತ ಮತ್ತು ಸೇವಾ ಶುಲ್ಕವನ್ನು ಪಾವತಿಸಿ ವಿದ್ಯಾರ್ಥಿ ಪಾಸನ್ನು ಪಡೆಯಲು ಅವಕಾಶ ಕಲ್ಪಿಸಲಾಗಿದೆ.<br><br>12. ನಿಗಮ/ಸಂಸ್ಥೆಯ ಬಸ್ಸುಗಳ ಆಚರಣೆ ಇರುವ ಮಾರ್ಗಗಳಿಗೆ ಮಾತ್ರ ಬಸ್ ಪಾಸ್‌ಗಳನ್ನು ವಿತರಿಸಲಾಗುತ್ತಿದೆ. |
| ಇ. | ಕಳೆದ ಸಾಲಿನಲ್ಲಿ ನೀಡಿದಂತಹ ರಿಯಾಯತಿ ಸೌಲಭ್ಯಗಳನ್ನು ಪ್ರಸಕ್ತ ಸಾಲಿನಲ್ಲೂ ಮುಂದುವರೆಸಲಾಗುವುದೇ; | ಹೌದು. |
| ಈ. | ಹಾಗಿದ್ದಲ್ಲಿ, ಸದರಿ ಸೌಲಭ್ಯಗಳ ಪೂರ್ಣ ವಿವರಗಳನ್ನು ನೀಡುವುದು; | ಕ್ರಮ ಸಂಖ್ಯೆ (ಆ)ರಲ್ಲಿ ಉತ್ತರಿಸಲಾಗಿದೆ. |

ಸಂಖ್ಯೆ: ಟಿಡಿ 164 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು